# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| ಭಾಗ- III | ಬೆಂಗಳೂರು, ಸೋಮವಾರ, ನವೆಂಬರ್ ೩, ೨೦೧೪ (ಕಾರ್ತೀಕ ೧೨, ಶಕ ವರ್ಷ ೧೯೩೬) | ನಂ. ೬೭೨ |
|---|---|---|
| **Part- III** | **Bangalore, Monday, November 3, 2014 (Karthika 12, Shaka Varsha 1936)** | **No. 672** |


## ರಾಜ್ಯ ಚುನಾವಣಾ ಆಯೋಗ

ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಂಡಳಿ ಕಟ್ಟಡ (ಹಿಂಭಾಗ) 1ನೇ ಮಹಡಿ, ನಂ.8, ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು–560052

**ಸಂಖ್ಯೆ ರಾಚುಆ.10.ಇಯುಬಿ.2014, ಬೆಂಗಳೂರು, ದಿನಾಂಕ: 03–11–2014**

ರಾಜ್ಯ ಚುನಾವಣಾ ಆಯೋಗವು ಶಿವಮೊಗ್ಗ ಜಿಲ್ಲೆ, ಜೋಗ್‌ಕಾರ್ಗಲ್ ಪಟ್ಟಣ ಪಂಚಾಯತಿ ಸಾರ್ವತ್ರಿಕ ಚುನಾವಣೆಯನ್ನು ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರ್‌ಗಳ ಚುನಾವಣೆ) ನಿಯಮಗಳು, 1977 ರ ನಿಯಮ 3(1) ರನ್ವಯ ಈ ಕೆಳಗೆ ನಮೂದಿಸಿರುವ ಚುನಾವಣಾ ವೇಳಾಪಟ್ಟಿಯಂತೆ ಚುನಾವಣೆಯನ್ನು ನಡೆಸಲು ಆದೇಶಿಸಿದೆ. ಚುನಾವಣಾ ವೇಳಾಪಟ್ಟಿ

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಜಿಲ್ಲಾಧಿಕಾರಿಗಳು ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ | 17–11–2014 ಸೋಮವಾರ |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 24–11–2014 ಸೋಮವಾರ |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 25–11–2014 ಮಂಗಳವಾರ |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 27–11–2014 ಗುರುವಾರ |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸ ಬೇಕಾದ ದಿನಾಂಕ ಮತ್ತು ದಿನ | 05–12–2014 ಶುಕ್ರವಾರ |
| 6 | ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 05–12–2014 ಶುಕ್ರವಾರ |
| 7 | ಮರು ಮತದಾನ ಇದ್ದಲ್ಲಿ, ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 07–12–2014 ಭಾನುವಾರ |
| 8 | ಮತಗಳ ಎಣಿಕೆಯ ದಿನಾಂಕ ಮತ್ತು ದಿನ ಬೆಳಿಗ್ಗೆ 8.00 ಘಂಟೆಯಿಂದ ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ | 08–12–2014 ಸೋಮವಾರ |
| 9 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 8–12–2014 ಸೋಮವಾರ |

ಜಿಲ್ಲಾಧಿಕಾರಿಗಳು ಆಯೋಗವು ಆದೇಶಿಸಿರುವ ಚುನಾವಣಾ ವೇಳಾ ಪಟ್ಟಿಯನ್ನು ಅನುಸರಿಸಿ ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರ್‌ಗಳ ಚುನಾವಣೆ) ನಿಯಮಗಳು, 1977ರ ನಿಯಮ 8ರ ಪ್ರಕಾರ ಜೋಗ್‌ಕಾರ್ಗಲ್ ಪಟ್ಟಣ ಪಂಚಾಯತಿ ಅಧಿಸೂಚನೆಯನ್ನು ಹೊರಡಿಸತಕ್ಕದ್ದು. ಹಾಗೆ ಹೊರಡಿಸಲಾದ ಅಧಿಸೂಚನೆಯನ್ನು ಅದೇ ದಿನದಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿತ ಅಧಿಸೂಚನೆಯ ಪ್ರತಿಗಳನ್ನು ಜಿಲ್ಲಾಧಿಕಾರಿಗಳ ಕಛೇರಿ, ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಯ ಕಛೇರಿ ಹಾಗೂ ಇನ್ನಿತರ ಮುಖ್ಯ ಸ್ಥಳಗಳಲ್ಲಿಯೂ ಸಹಾ ಪ್ರದರ್ಶಿಸತಕ್ಕದ್ದು. ಅಧಿಸೂಚನೆಯ ಪ್ರತಿಯನ್ನು ಚುನಾವಣಾಧಿಕಾರಿಗಳಿಗೆ ಕಳುಹಿಸಿಕೊಟ್ಟು ಅದೇ ದಿನದಂದು ಪ್ರಪತ್ರ–1ಎ ರಲ್ಲಿ ಚುನಾವಣಾ ನೋಟೀಸನ್ನು ಪ್ರಕಟಿಸುವಂತೆ ಅವರಿಗೆ ಸೂಚನೆಗಳನ್ನು ನೀಡತಕ್ಕದ್ದು. ಚುನಾವಣೆ ನಡೆಯುವ ವಿಷಯವನ್ನು ಸಾರ್ವಜನಿಕರ ಮಾಹಿತಿಗಾಗಿ ದಿನಪತ್ರಿಕೆಗಳಲ್ಲಿ ಹಾಗೂ ಸ್ಥಳೀಯ ಪತ್ರಿಕೆಗಳಲ್ಲಿ (ವೆಚ್ಚ ಬಾರದಂತೆ) ಪ್ರಕಟಿಸಲು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.

ಸದಾಚಾರ ಸಂಹಿತೆಯು ಜಿಲ್ಲಾಧಿಕಾರಿಗಳು ವೇಳಾಪಟ್ಟಿಯನ್ನು ಅಧಿಸೂಚಿಸುವ ಅಂದರೆ ದಿನಾಂಕ: 17–11–2014 ರಿಂದ ಜಾರಿಗೆ ಬರಲಿದ್ದು, ಚುನಾವಣಾ ಪ್ರಕ್ರಿಯೆಯು ಮುಕ್ತಾಯಗೊಳ್ಳುವವರೆಗೆ ಅಂದರೆ ದಿನಾಂಕ: 08–12–2014 ವರೆಗೆ ಚುನಾವಣೆ ನಡೆಯುವ ಜೋಗ್‌ಕಾರ್ಗಲ್ ಪಟ್ಟಣ ಪಂಚಾಯತಿ ವಾರ್ಡುಗಳ ವ್ಯಾಪ್ತಿಯಲ್ಲಿ ಮಾತ್ರ ಜಾರಿಯಲ್ಲಿರುತ್ತದೆ. ಸದಾಚಾರ ಸಂಹಿತೆಯು ಯಾವುದೇ ರೀತಿಯಲ್ಲೂ ಉಲ್ಲಂಘನೆಯಾಗದಂತೆ ನೋಡಿಕೊಳ್ಳತಕ್ಕದ್ದು.

ಆದೇಶಾನುಸಾರ

**ಕವಿತಾರಾಣಿ.ಆರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಸೋಮವಾರ, ನವೆಂಬರ್ ೩, ೨೦೧೪ (ಕಾರ್ತೀಕ ೧೨, ಶಕ ವರ್ಷ ೧೯೩೬) | ನಂ. ೬೭೩ |
|---|---|---|
| Part– III | Bangalore, Monday, November 3, 2014 (Karthika 12, Shaka Varsha 1936) | No. 673 |

## ರಾಜ್ಯ ಚುನಾವಣಾ ಆಯೋಗ

ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಂಡಳಿ ಕಟ್ಟಡ (ಹಿಂಭಾಗ) 1ನೇ ಮಹಡಿ, ನಂ.8, ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು–560052

**ಸಂಖ್ಯೆ ರಾಚುಆ.20.ಇಯುಬಿ.2014, ಬೆಂಗಳೂರು, ದಿನಾಂಕ: 03–11–2014**

**ನಗರ ಸ್ಥಳೀಯ ಸಂಸ್ಥೆಗಳ ಉಪಚುನಾವಣೆ–2014**

ರಾಜ್ಯ ಚುನಾವಣಾ ಆಯೋಗವು ಈ ಆದೇಶದ ಅನುಬಂಧದಲ್ಲಿರುವ ನಗರ ಸ್ಥಳೀಯ ಸಂಸ್ಥೆಗಳ ವಾರ್ಡುಗಳಿಗೆ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಕ್ಕೆ ಈ ಕೆಳಗೆ ನಮೂದಿಸಿರುವ ಚುನಾವಣಾ ವೇಳಾಪಟ್ಟಿಯಂತೆ ಉಪಚುನಾವಣೆಯನ್ನು ನಡೆಸಲು ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ (ಚುನಾವಣೆ) ನಿಯಮಗಳು 1979ರ ನಿಯಮ 3(1) ರಂತೆ ಹಾಗೂ ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರುಗಳ ಚುನಾವಣೆ) ನಿಯಮಗಳು 1977ರ ನಿಯಮ 3(1) ರಂತೆ ಆದೇಶಿಸಿದೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಜಿಲ್ಲಾಧಿಕಾರಿಗಳು ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ | 17–11–2014<br>ಸೋಮವಾರ |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 24–11–2014<br>ಸೋಮವಾರ |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 25–11–2014<br>ಮಂಗಳವಾರ |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 27–11–2014<br>ಗುರುವಾರ |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸ ಬೇಕಾದ ದಿನಾಂಕ ಮತ್ತು ದಿನ | 05–12–2014<br>ಶುಕ್ರವಾರ |
| 6 | ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 05–12–2014<br>ಶುಕ್ರವಾರ |
| 7 | ಮರು ಮತದಾನ ಇದ್ದಲ್ಲಿ, ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 07–12–2014<br>ಭಾನುವಾರ |
| 8 | ಮತಗಳ ಎಣಿಕೆಯ ದಿನಾಂಕ ಮತ್ತು ದಿನ ಬೆಳಿಗ್ಗೆ 8.00 ಘಂಟೆಯಿಂದ ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ | 08–12–2014<br>ಸೋಮವಾರ |
| 9 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 8–12–2014<br>ಸೋಮವಾರ |

ಜಿಲ್ಲಾಧಿಕಾರಿಗಳು ಆಯೋಗವು ಆದೇಶಿಸಿದ ಚುನಾವಣಾ ವೇಳಾಪಟ್ಟಿಯನ್ನು ಅನುಸರಿಸಿ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ (ಚುನಾವಣೆ) ನಿಯಮಗಳು 1979ರ ನಿಯಮ 10 ರಡಿಯಲ್ಲಿ ಕಾರ್ಪೊರೇಷನ್‌ಗಳಿಗೆ ಸಂಬಂಧಿಸಿದ ಚುನಾವಣಾ ಅಧಿಸೂಚನೆಗಳನ್ನು ಮತ್ತು ಕರ್ನಾಟಕ ಮುನಿಸಿಪಾಲಿಟಿ (ಎಲೆಕ್ಷನ್ ಆಫ್ ಕೌನ್ಸಿಲರ್ಸ್) ನಿಯಮಗಳು 1977 ರ ನಿಯಮ 8 ರ ಪ್ರಕಾರನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯತಿಗಳಿಗೆ ಸಂಬಂಧಿಸಿದ ಚುನಾವಣಾ ಅಧಿಸೂಚನೆಯನ್ನು ಫಾರಂ ನಂ.1ರಲ್ಲಿ ಹೊರಡಿಸತಕ್ಕದ್ದು. ಹಾಗೆ ಹೊರಡಿಸಲಾದ ಅಧಿಸೂಚನೆಯನ್ನು ಅದೇ ದಿನದಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿತ ಅಧಿಸೂಚನೆಯ ಪ್ರತಿಗಳನ್ನು ಜಿಲ್ಲಾಧಿಕಾರಿ ಕಛೇರಿ, ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಯ ಕಛೇರಿ ಹಾಗೂ ಇನ್ನಿತರ ಮುಖ್ಯ ಸ್ಥಳಗಳಲ್ಲಿಯೂ ಸಹಾ ಪ್ರದರ್ಶಿಸತಕ್ಕದ್ದು. ಅಧಿಸೂಚನೆಯ ಪ್ರತಿಯನ್ನು ಚುನಾವಣಾಧಿಕಾರಿಗಳಿಗೆ ಕಳುಹಿಸಿಕೊಟ್ಟು ಅದೇ ದಿನದಂದು ಪ್ರಪತ್ರ–1ಎ ರಲ್ಲಿ ಚುನಾವಣಾ ನೋಟೀಸನ್ನು ಪ್ರಕಟಿಸುವಂತೆ ಸೂಚನೆಗಳನ್ನು ನೀಡತಕ್ಕದ್ದು. ಚುನಾವಣೆ ನಡೆಯುವ ವಿಷಯವನ್ನು ಸಾರ್ವಜನಿಕರ ಮಾಹಿತಿಗಾಗಿ ದಿನಪತ್ರಿಕೆಗಳಲ್ಲಿ ಹಾಗೂ ಸ್ಥಳೀಯ ಪತ್ರಿಕೆಗಳಲ್ಲಿ (ವೆಚ್ಚ ಬಾರದಂತೆ) ಪ್ರಕಟಿಸಲು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು. ಚುನಾವಣಾಧಿಕಾರಿ/ ಸಹಾಯಕ ಚುನಾವಣಾಧಿಕಾರಿಗಳನ್ನು ನೇಮಿಸಿ ನೇಮಕಾತಿ ಆದೇಶದ ಪ್ರತಿಯನ್ನು ಆಯೋಗಕ್ಕೆ ಕಳುಹಿಸುವುದು.

ಚುನಾವಣೆ ನಡೆಯುವ ನಗರ ಸ್ಥಳೀಯ ಸಂಸ್ಥೆಗಳ ವಾರ್ಡ್ ವ್ಯಾಪ್ತಿಯಲ್ಲಿ ಚುನಾವಣಾ ನೀತಿ ಸಂಹಿತೆಯು ದಿನಾಂಕ: 17–11–2014 ರಿಂದ ಜಾರಿಗೆ ಬರಲಿದ್ದು, ದಿನಾಂಕ: 08–12–2014 ರವರೆಗೆ ಜಾರಿಯಲ್ಲಿರುತ್ತದೆ. ಜಿಲ್ಲಾಧಿಕಾರಿಗಳು ಸದಾಚಾರ ಸಂಹಿತೆಯು ಯಾವುದೇ ರೀತಿಯಲ್ಲೂ ಉಲ್ಲಂಘನೆಯಾಗದಂತೆ ನೋಡಿಕೊಳ್ಳತಕ್ಕದ್ದು.

ಆದೇಶಾನುಸಾರ

**ಕವಿತಾರಾಣಿ.ಆರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

**ಸಂಖ್ಯೆ: ರಾಚುಆ.20.ಇಯುಬಿ.2014 ದಿನಾಂಕ: 03-11-2014 ರ ಅನುಬಂಧ**

| ವಿವಿಧ ಕಾರಣಗಳಿಂದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ತೆರವಾದ ಸದಸ್ಯ ಸ್ಥಾನಗಳ ವಿವರಗಳು | | | | |
|---|---|---|---|---|
| ಕ್ರ.ಸಂ. | ಜಿಲ್ಲೆ | ನಗರ ಸ್ಥಳೀಯ ಸಂಸ್ಥೆಯ ಹೆಸರು | | ವಾರ್ಡ್ ನಂ. |
| 1 | ತುಮಕೂರು | ಪುರಸಭೆ | ಪಾವಗಡ | 13 |
| 2 | ಕೋಲಾರ | ನಗರಸಭೆ | ಕೋಲಾರ | 18 |
| 3 | ಚಿಕ್ಕಬಳ್ಳಾಪುರ | ನಗರಸಭೆ | ಚಿಕ್ಕಬಳ್ಳಾಪುರ | 26 |
| | | ಪಟ್ಟಣ ಪಂಚಾಯತಿ | ಪಿರಿಯಾಪಟ್ಟಣ | 03, 10 |
| 5 | ಚಾಮರಾಜನಗರ | ಪಟ್ಟಣ ಪಂಚಾಯತಿ | ಹನ್ನೂರು | 03 |
| 6 | ದಕ್ಷಿಣ ಕನ್ನಡ | ಪಟ್ಟಣ ಪಂಚಾಯತಿ | ಬೆಳ್ತಂಗಡಿ | 11 |
| 7 | ಚಿಕ್ಕಮಗಳೂರು | ನಗರಸಭೆ | ಚಿಕ್ಕಮಗಳೂರು | 28 |
| | | ಪುರಸಭೆ | ಬೀರೂರು | 09 |
| 8 | ಉತ್ತರ ಕನ್ನಡ | ನಗರಸಭೆ | ಶಿರಸಿ | 23 |
| 9 | ಹಾವೇರಿ | ನಗರಸಭೆ | ರಾಣೆಬೆನ್ನೂರು | 23 |
| 10 | ಗುಲ್ಬರ್ಗಾ | ಪುರಸಭೆ | ಸೇಡಂ | 10 |
| 11 | ಯಾದಗಿರಿ | ನಗರಸಭೆ | ಯಾದಗಿರಿ | 02 |

ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ



# ವಿಶೇಷ ರಾಜ್ಯ ಪತ್ರಿಕೆ

| ಭಾಗ- III | ಬೆಂಗಳೂರು, ಗುರುವಾರ, ನವೆಂಬರ್ ೬, ೨೦೧೪ (ಕಾರ್ತೀಕ ೧೫, ಶಕ ವರ್ಷ ೧೯೩೬) | ನಂ. ೬೭೪ |
|---|---|---|
| Part- III | Bangalore, Thursday, November 6, 2014 (Karthika 15, Shaka Varsha 1936) | No. 674 |



## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 71 ಎಂಎಲ್ಆರ್ 2014, ಬೆಂಗಳೂರು, ದಿನಾಂಕ: 06-11-2014**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3 ನೇ ಪ್ರಕರಣದೊಂದಿಗೆ ಓದಿಕೊಂಡ 9 ನೇ ಮತ್ತು 355-ಇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ, ಅಂದರೆ:-

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ 'ಎ' ಮತ್ತು ಅನುಸೂಚಿ 'ಬಿ' ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಅಂಕೋಲಾ **'ಪಟ್ಟಣ ಪಂಚಾಯತಿ'** ಪ್ರದೇಶವನ್ನು **ಅಂಕೋಲಾ 'ಸಣ್ಣ ನಗರ ಪ್ರದೇಶ'**ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು **'ಅಂಕೋಲಾಪುರಸಭೆ'**ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸರ್ಕಾರದ ಉಪಕಾರ್ಯದರ್ಶಿ-2, ನಗರಾಭಿವೃದ್ಧಿ ಇಲಾಖೆ, ಕೊಠಡಿ ಸಂ: 428, 4ನೇ ಮಹಡಿ, ವಿಕಾಸಸೌಧ, ಬೆಂಗಳೂರು,

ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಸೂಚಿ ಎ**

1. **ಅಂಕೋಲಾ ಪಟ್ಟಣದ ವ್ಯಾಪ್ತಿ**
   ಅ) ಶಿರಕುಳಿ ಗ್ರಾಮ
   ಬ) ವಂದಿಗೆ ಗ್ರಾಮ
   ಕ) ತೆಂಕಣಕೇರಿ ಗ್ರಾಮ
   ಡ) ಲಕ್ಷ್ಮೇಶ್ವರ ಗ್ರಾಮ

**ಅನುಸೂಚಿ –ಬಿ**

**ಪೂರ್ವ:** ಪೂರ್ವ ಗಡಿಯು ಶಿರಕುಳಿ ಗ್ರಾಮದ ಈಶಾನ್ಯ ಮೂಲೆಯಿಂದ ಸ.ನಂ.263 ರಿಂದ ಪ್ರಾರಂಭವಾಗಿ ಶೇಡಗೇರಿ ಗ್ರಾಮದ ಅರಣ್ಯ ಸರ್ವೆ ನಂ.108ಕ್ಕೆ ಸ್ಪರ್ಶಿಸಿ ದಕ್ಷಿಣಕ್ಕೆ ಮುಂದುವರಿದು ವಂದಿಗೆ ಗ್ರಾಮದ ಸ.ನಂ.61 ರವರೆಗೆ

**ದಕ್ಷಿಣ:** ದಕ್ಷಿಣ ಗಡಿಯು ವಂದಿಗೆ ಗ್ರಾಮದ ಸ.ನಂ.62 ರಿಂದ ಹಾದು ಲಕ್ಷ್ಮೇಶ್ವರ ಗ್ರಾಮದ ಸ.ನಂ.112 ಮುಖಾಂತರ ಪಶ್ಚಿಮಕ್ಕೆ ಹಾದು ಬೊಬ್ರುವಾಡಾ ಗ್ರಾಮದ ಸ.ನಂ.309 ರವರೆಗೆ ಪೂರ್ವದ ಗಡಿ.

**ಪಶ್ಚಿಮ:** ಪಶ್ಚಿಮ ಗಡಿಯು ಬೊಬ್ರುವಾಡಾ ಗ್ರಾಮದ ಸ.ನಂ.303 ರಿಂದ ಉತ್ತರ ದಿಕ್ಕಿಗೆ ಹಾದು ಸ.ನಂ.246 ರಿಂದ ಮುಂದುವರಿದು ಈಗಿನ ಪಟ್ಟಣ ಪಂಚಾಯತಿಯ ಗಡಿಯ. ಅಂಕೋಲಾ ಸ.ನಂ.105 ರಿಂದ 185 ರವರೆಗೆ ಉತ್ತರದ ಗಡಿ.

**ಉತ್ತರ:** ಉತ್ತರ ಗಡಿಯು ಬಾವಿಕೇರಿ ಗ್ರಾಮದ ಗಡಿಯ ದಕ್ಷಿಣಕ್ಕೆ ತಿರುಗಿ ಅಲಗೇರಿ ಗ್ರಾಮದ ಸ.ನಂ.68 ರ ಪೂರ್ವದ ಗಡಿಯ ಸ.ನಂ.143 ರ ಪಶ್ಚಿಮ ಗಡಿಯ ದಕ್ಷಿಣಕ್ಕೆ ಶಿರಕುಳಿ ಗ್ರಾಮದ ಸ.ನಂ.17 ರಿಂದ ಪೂರ್ವಕ್ಕೆ 91 ರಿಂದ ಹಾದು 110 ರ ವರೆಗೆ ಪೂರ್ವದ ಗಡಿ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

## URBAN DEVELOPMENT SECRETARIAT

### NOTIFICATION

### No. UDD 71 MLR 2014, Bangalore, Dated:06.11.2014

In exercise of the powers conferred by the section 3 read with section 355(E) of the Karnataka Municipalities Act 1964, the 'Town Panchayat Area of Ankola' mentioned in Schedule "A" along with boundaries mentioned in Scheduled "B" hereby declared as the "**Smaller Urban Area" of Ankola** and further specify such area to be the "**Town Municipal Area" of Ankola** with effect from the date of publishing this Notification in the Official Gazette by the Governor of Karnataka having regard to:

i. The population of such area is not less than twenty thousand and not more than three lakhs;

ii. The density of population in such area is not less than one thousand five hundred inhabitants to one square kilometer of area;

iii. The revenue generated for local administration from such area from tax and non-tax sources in the year of the last preceding census is not less than rupees nine lakhs per annum or a sum calculated at the rate of rupees forty five per capita per annum, whichever is higher;

iv. The percentage of employment in non-agricultural activities is not less than fifty per cent of the total employment;

The notification is hereby published for the information of the persons likely to be affected thereby and the information is hereby by given that the notification will be taken into consideration after 30 days from the date of publication of this notification in the official gazette.

All the persons, who likely to file any objections/suggestions to the said notification are hereby required to submit the same with reasons therefore in writing to the Deputy Secretary-2 to Government, Urban Development Department, No.428, 4th Floor, Vikasa Soudha, Bangalore.

By Order and in the name of the Governor of Karnataka

**SIDDIQ PASHA**
Under Secretary to Government
Urban Development Department

**Schedule A**

**Town limit of Ankola**

a) Shirkuli Village
b) Vandegi Village
c) Tenkankeri Village
d) Laxmeshwar Village

**Schedule B**

**East :** The Boundary of Shirkuli Village starting from corner of north east sy. No.263 and touch the forest sy. No. 108. joining southern side of the Vandegi village up to sy. No. 61.

**South:** The southern Boundary of the Vandegi village starts from sy No.62 and passes through Laxmeshwar Village sy No.112 through west side of the Bobruwada Village at sy No. 309 of eastern side.

**West:** The Boundary of the western side starts from the Bobruwada village at sy No.303 passes through the Northern sy. No.246 extend up to existing Town Panchayat Boundary of the Ankola sy No.105 to 185 of the Northern side.

**North:** The Boundary of the Northern side starts from the Bavikeri Village turning to southern side of the Algeri village sy. No.68 eastern side of the sy. No. 143 and western side of the south Shirkuli Village passes through sy. No.17 to eastern side from sy. No.91 to 110 up to eastern side of the Boundary.

**SIDDIQ PASHA**
Under Secretary to Government
Urban Development Department

# ವಿಶೇಷ ರಾಜ್ಯ ಪತ್ರಿಕೆ


| ಭಾಗ– III | ಬೆಂಗಳೂರು, ಸೋಮವಾರ, ನವೆಂಬರ್ ೧೭, ೨೦೧೪ (ಕಾರ್ತೀಕ ೨೬, ಶಕ ವರ್ಷ ೧೯೩೬) | ನಂ. ೬೯೯ |
|---|---|---|
| Part– III | Bangalore, Monday, November 17, 2014 (Karthika 26, Shaka Varsha 1936) | No. 699 |


## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ಪ್ರಪತ್ರ – 1**

**(8(1)ನೇ ನಿಯಮವನ್ನು ನೋಡಿ)**

(ನಗರಸಭೆ, ಪುರಸಭೆ/ ಪಟ್ಟಣ ಪಂಚಾಯಿತಿ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)

**ಅಧಿಸೂಚನೆ**

**ಸಂ.ಇಎಲ್ಎನ್(2)ಸಿಆರ್/10/2014–15, ದಿನಾಂಕ 17/11/2014**

(1) 1964 ನೇ ಕರ್ನಾಟಕ ಪುರಸಭೆಗಳ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸ್ಥಾಪಿತವಾದ ಕೋಲಾರ ನಗರಸಭೆಯ ವಾರ್ಡ್ ನಂಬರ್ 18 ರಲ್ಲಿ ತೆರವಾಗಿರುವ ಸದಸ್ಯರ ಸ್ಥಾನವನ್ನು(ಸಾಮಾನ್ಯ) ತುಂಬಲು ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿರುವ ವಿವರಗಳಂತೆ ಮೇಲ್ಕಂಡ ನಗರಸಭೆಯಲ್ಲಿ ತೆರವಾಗಿರುವ ಸದಸ್ಯರ ಸ್ಥಾನವನ್ನು ತುಂಬಲು,

(2) ಕೋಲಾರ ನಗರಸಭೆಯ ವಾರ್ಡ್ ನಂಬರ್ 18 ರ ಸದಸ್ಯರಾಗಿದ್ದ ಶ್ರೀ. ಎಲ್. ನಜೀರ್ ಅಹ್ಮದ್ ಬಿನ್ ಎಲ್. ವಜೀರ್ ಸಾಬ್ ರವರ ಮರಣದಿಂದಾಗಿ ಖಾಲಿಯಾಗಿರುವುದಾಗಿ ಘೋಷಿಸಿರುವುದರಿಂದ ಉಂಟಾದ ಖಾಲಿ ಸದಸ್ಯ ಸ್ಥಾನವನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ,

ಆದುದರಿಂದ, ಕರ್ನಾಟಕ ಪುರಸಭೆಗಳ (ಕೌನ್ಸಿಲರುಗಳ ಚುನಾವಣೆ) ನಿಯಮಗಳು 1977 ರ ನಿಯಮ 8 ರ ಅನುಸಾರವಾಗಿ ಕೋಲಾರ ಜಿಲ್ಲೆಯ ಡೆಪ್ಯುಟಿ ಕಮೀಷನರ್‌ರಾದ ಡಾ: ಕೆ.ವಿ.ತ್ರಿಲೋಕ್ ಚಂದ್ರ, ಭಾ.ಆ.ಸೇ., ಆದ ನಾನು, ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾ ಪಟ್ಟಿಯನ್ನು ಈ ಮೂಲಕ ನಿಗಧಿಪಡಿಸಿರುತ್ತೇನೆ.

**ಚುನಾವಣಾ ವೇಳಾ ಪಟ್ಟಿ**

| | | | |
|---|---|---|---|
| (ಎ) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | : | 24–11–2014 (ಸೋಮವಾರ) |
| (ಬಿ) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | : | 25–11–2014 (ಮಂಗಳವಾರ) |
| (ಸಿ) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ | : | 27–11–2014 (ಗುರುವಾರ) |
| (ಡಿ) | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | : | 05–12–2014 (ಶುಕ್ರವಾರ) |
| (ಇ) | ಮತದಾನದ ಸಮಯ | : | ಬೆಳಿಗ್ಗೆ 7–00 ಗಂಟೆಯಿಂದ ಸಂಜೆ 5–00 ಗಂಟೆಯವರೆಗೆ |
| (ಎಫ್) | ಮತಗಳ ಎಣಿಕೆ ದಿನಾಂಕ, ದಿನ, ಸ್ಥಳ ಮತ್ತು ಸಮಯ | : | 08–12–2014 (ಸೋಮವಾರ) ಬೆಳಿಗ್ಗೆ 8–00 ಗಂಟೆಯಿಂದ ತಾಲ್ಲೂಕಿನ ಕೇಂದ್ರಸ್ಥಾನದಲ್ಲಿ |
| (ಜಿ) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯ ಗೊಳಿಸಬೇಕೋ ಆ ದಿನಾಂಕ ಮತ್ತು ದಿನ | : | 08–12–2014 (ಸೋಮವಾರ) |

**ಡಾ:ಕೆ.ವಿ.ತ್ರಿಲೋಕ್ ಚಂದ್ರ**
ಜಿಲ್ಲಾಧಿಕಾರಿಗಳು
ಕೋಲಾರ ಜಿಲ್ಲೆ, ಕೋಲಾರ

**ತ:ಖ್ತೆ**
ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ
ಸಂ.ಇಎಲ್ಎನ್(2)ಸಿಆರ್/10/2014–15 ದಿನಾಂಕ 17/11/2014

ಕೋಲಾರ ಜಿಲ್ಲೆಯ ಈ ಕೆಳಕಂಡ ನಗರಸಭೆಯಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ನಗರಸಭಾ ಸದಸ್ಯ ಸ್ಥಾನಕ್ಕೆ ಉಪ ಚುನಾವಣೆಯನ್ನು ನಡೆಸಲು ವೇಳಾ ಪಟ್ಟಿಯನ್ನು ನಿಗಧಿಪಡಿಸಿದೆ.

| ಕ್ರ. ಸಂ. | ತಾಲ್ಲೂಕಿನ ಹೆಸರು | ನಗರ ಸ್ಥಳೀಯ ಸಂಸ್ಥೆಯ ಹೆಸರು | ವಾರ್ಡ್ ಸಂಖ್ಯೆ | ಸ್ಥಾನಗಳ ಸಂಖ್ಯೆ | ಸದಸ್ಯ ಸ್ಥಾನ ತೆರವಾಗಲು ಕಾರಣ | ಮೀಸಲಾತಿ ವಿವರ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಕೋಲಾರ | ನಗರಸಭೆ, ಕೋಲಾರ | 18 | 1 (ಒಂದು) | ಸದಸ್ಯರ ಮರಣದಿಂದ | ಸಾಮಾನ್ಯ |

**ಡಾ:ಕೆ.ವಿ.ತ್ರಿಲೋಕ್ ಚಂದ್ರ**
ಜಿಲ್ಲಾಧಿಕಾರಿಗಳು
ಕೋಲಾರ ಜಿಲ್ಲೆ, ಕೋಲಾರ

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಸೋಮವಾರ, ನವೆಂಬರ್ ೧೭, ೨೦೧೪ (ಕಾರ್ತೀಕ ೨೬, ಶಕ ವರ್ಷ ೧೯೩೬) | ನಂ. ೭೦೦ |
|---|---|---|
| Part– III | Bangalore, Monday, November 17, 2014 (Karthika 26, Shaka Varsha 1936) | No. 700 |

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ**

**ಪ್ರಪತ್ರ – 1**

**(ನಿಯಮ 8(1)ನ್ನು ನೋಡಿ)**

**ಅಧಿಸೂಚನೆ**

**ಸಂಖ್ಯೆ: ಇಎಲ್ಎನ್(2)/ಸಿಆರ್/26/2014–15, ದಿನಾಂಕ 17/11/2014**

1964 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸ್ಥಾಪಿತವಾದ **ಚಿಕ್ಕಬಳ್ಳಾಪುರ ನಗರಸಭೆಯ ಪಾಂಡುರಂಗ ಸ್ವಾಮಿ ದೇವಾಲಯ, ಐ.ಟಿ.ಐ. ರಸ್ತೆ, ಹಳೇ ಸಂತೆಪೇಟೆ–ವಾರ್ಡ್–26** ಕೌನ್ಸಿಲರ್ (ನಗರಸಭೆ ಸದಸ್ಯ) ಸ್ಥಾನವನ್ನು ಈ ಅಧಿಸೂಚನೆಯ ಅನುಬಂಧದಲ್ಲಿ ಹೇಳಿದ ಸದರಿ ನಗರಸಭೆಯ ವಾರ್ಡ್‌ನಿಂದ ತುಂಬಲು.

ಈಗ 1977 ಕರ್ನಾಟಕ ಮುನಿಸಿಪಾಲಿಟಿಗಳ ಕೌನ್ಸಿಲರುಗಳ (ಚುನಾವಣೆ) ನಿಯಮಗಳ 8ನೇ ನಿಯಮದ ಅನುಸಾರವಾಗಿ **ಡಾ॥ ಎಂ.ವಿ.ವೆಂಕಟೇಶ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಈ ಮೂಲಕ ಸದರಿ ಚುನಾವಣೆಯ ಸಂಬಂಧದಲ್ಲಿ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | ಚುನಾವಣಾ ವೇಳಾಪಟ್ಟಿ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 24/11/2014 ಸೋಮವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 25/11/2014 ಮಂಗಳವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 27/11/2014 ಗುರುವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 05/12/2014 ಶುಕ್ರವಾರ |
| 5. | ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 05/12/2014 ಶುಕ್ರವಾರ |
| 6. | ಮರು ಮತದಾನ ಇದ್ದಲ್ಲಿ ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 07/12/2014 ಭಾನುವಾರ |
| 7. | ಮತಗಳ ಎಣಿಕೆಯು ದಿನಾಂಕ ಮತ್ತು ದಿನ ಬೆಳಿಗ್ಗೆ 8.00 ಘಂಟೆಯಿಂದ ತಾಲ್ಲೂಕು ಕೇಂದ್ರ ಸ್ಥಳದಲ್ಲಿ | 08/12/2014 ಸೋಮವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 08/12/2014 ಸೋಮವಾರ |

**ಪ್ರಪತ್ರ 1ರ ಅನುಬಂಧ**

**ನಗರ ಸ್ಥಳೀಯ ಸಂಸ್ಥೆಯ ಕೌನ್ಸಿಲರ್ ಸ್ಥಾನಕ್ಕೆ ಉಪ ಚುನಾವಣೆ–2014**
**ನಗರಸಭೆ, ಚಿಕ್ಕಬಳ್ಳಾಪುರ**

| ಕ್ರ.ಸಂ. | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗ |
|---|---|---|---|
| 1. | ಪಾಂಡುರಂಗ ಸ್ವಾಮಿ ದೇವಾಲಯ, ಐ.ಟಿ.ಐ. ರಸ್ತೆ, ಹಳೇ ಸಂತೆಪೇಟೆ–ವಾರ್ಡ್ ಸಂಖ್ಯೆ–26 | ಒಂದು | ಹಿಂದುಳಿದ ವರ್ಗ "ಅ" (ಮಹಿಳೆ) |

**ಡಾ|| ಎಂ.ವಿ.ವೆಂಕಟೇಶ್, ಭಾ.ಆ.ಸೇ,**
ಜಿಲ್ಲಾಧಿಕಾರಿಗಳು,
ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು,
ಚಿಕ್ಕಬಳ್ಳಾಪುರ ಜಿಲ್ಲೆ.

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಮಂಗಳವಾರ, ನವೆಂಬರ್ ೧೮, ೨೦೧೪ (ಕಾರ್ತೀಕ ೨೭, ಶಕ ವರ್ಷ ೧೯೩೬) | ನಂ. ೭೦೧ |
|---|---|---|
| Part– III | Bangalore, Tuesday, November 18, 2014 (Karthika 27, Shaka Varsha 1936) | No. 701 |

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಪತ್ರ – 1**

**(ನಿಯಮ 8(1)ನ್ನು ನೋಡಿ)**

**(ಜೋಗ್–ಕಾರ್ಗಲ್ ಪಟ್ಟಣ ಪಂಚಾಯಿತಿಯ ಕೌನ್ಸಿಲರ್‌ಗಳ ಚುನಾವಣೆ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

**ಅಧಿಸೂಚನೆ**

**ಸಂಖ್ಯೆ: ಚು(4)/ಸಿಆರ್50/2014–15, ದಿನಾಂಕ 17/11/2014**

1964 ರ ಕರ್ನಾಟಕ ಪುರಸಭೆಗಳ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸ್ಥಾಪಿತವಾಗಿದ್ದ ಅವಧಿ ಮುಕ್ತಾಯಗೊಂಡ ಜೋಗ್-ಕಾರ್ಗಲ್ ಪಟ್ಟಣ ಪಂಚಾಯತಿಯ **11** ವಾರ್ಡ್ಗಳಿಂದ ಈ ಅಧಿಸೂಚನೆಯ ಅನುಬಂಧದಲ್ಲಿ ವಿವರಗಳನ್ನು ನೀಡಲಾಗಿರುವ ಸದರಿ ಪಟ್ಟಣ ಪಂಚಾಯತಿಯ ಕೌನ್ಸಿಲರ್ಗಳ ವಿವಿಧ ವಾರ್ಡ್ಗಳಿಂದ ಕೌನ್ಸಿಲರುಗಳನ್ನು ತುಂಬಲು,

ಕರ್ನಾಟಕ ಪುರಸಭೆಗಳ (ಎಲೆಕ್ಷನ್ ಅಫ್ ಕೌನ್ಸಿಲರ್) ನಿಯಮ 8ನೇ ನಿಯಮದ ಅನುಸಾರವಾಗಿ ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಯಾದ ವಿ.ಪಿ.ಇಕ್ಕೇರಿ ಎಂಬ ನಾನು ಸದರಿ ಚುನಾವಣೆಯ ಸಂದರ್ಭದಲ್ಲಿ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



| | | |
|---|---|---|
| 1 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 24-11-2014 ಸೋಮವಾರ |
| 2 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 25-11-2014 ಮಂಗಳವಾರ |
| 3 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 27-11-2014 ಗುರುವಾರ |
| 4 | ಮತದಾನದ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 05-12-2014 ಶುಕ್ರವಾರ |
| 5 | **ಮತದಾನದ ವೇಳೆ:- ಬೆಳಿಗ್ಗೆ 7-00 ಗಂಟೆಯಿಂದ ಸಾಯಂಕಾಲ 5-00 ಗಂಟೆಯವರೆಗೆ** | |
| 6 | ಮರು ಮತದಾನ ಇದ್ದಲ್ಲಿ ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5-00 ಗಂಟೆಯವರೆಗೆ | 07-12-2014 ಭಾನುವಾರ |
| 7 | ಮತಗಳ ಎಣಿಕೆ ದಿನಾಂಕ ಮತ್ತು ದಿನ<br>ಬೆಳಿಗ್ಗೆ 8-00 ಘಂಟೆಯಿಂದ (ಸಂಬಂಧಿಸಿದ ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 08-12-2014 ಸೋಮವಾರ |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 08-12-2014 ಸೋಮವಾರ |

**ವಿ.ಪಿ.ಇಕ್ಕೇರಿ**
**ಜಿಲ್ಲಾಧಿಕಾರಿ,**
**ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

## ಅನುಬಂಧ

### ಜೋಗ್-ಕಾರ್ಗಲ್ ಪಟ್ಟಣ ಪಂಚಾಯಿತಿ ಕೌನ್ಸಿಲ್ ಚುನಾವಣೆ-2014

| ಕ್ರ.ಸಂ | ವಾರ್ಡ್ ನಂಬರ್ ಮತ್ತು ಹೆಸರು | ಮೀಸಲಾತಿ |
|---|---|---|
| 1 | ಜೋಗ್-ಕಾರ್ಗಲ್-1 | ಪರಿಶಿಷ್ಟ ಜಾತಿ (ಮಹಿಳೆ) |
| 2 | ಜೋಗ್-ಕಾರ್ಗಲ್-2 | ಹಿಂದುಳಿದ ವರ್ಗ (ಎ) (ಮಹಿಳೆ) |
| 3 | ಜೋಗ್-ಕಾರ್ಗಲ್-3 | ಸಾಮಾನ್ಯ |
| 4 | ಜೋಗ್-ಕಾರ್ಗಲ್-4 | ಸಾಮಾನ್ಯ |
| 5 | ಜೋಗ್-ಕಾರ್ಗಲ್-5 | ಸಾಮಾನ್ಯ (ಮಹಿಳೆ) |
| 6 | ಜೋಗ್-ಕಾರ್ಗಲ್-6 | ಹಿಂದುಳಿದ ವರ್ಗ (ಎ) |
| 7 | ಜೋಗ್-ಕಾರ್ಗಲ್-7 | ಸಾಮಾನ್ಯ (ಮಹಿಳೆ) |
| 8 | ಜೋಗ್-ಕಾರ್ಗಲ್-8 | ಸಾಮಾನ್ಯ (ಮಹಿಳೆ) |
| 9 | ಜೋಗ್-ಕಾರ್ಗಲ್-9 | ಸಾಮಾನ್ಯ |
| 10 | ಜೋಗ್-ಕಾರ್ಗಲ್-10 | ಪರಿಶಿಷ್ಟ ಜಾತಿ |
| 11 | ಜೋಗ್-ಕಾರ್ಗಲ್-11 | ಪರಿಶಿಷ್ಟ ಪಂಗಡ (ಮಹಿಳೆ) |

ವಿ.ಪಿ.ಇಕ್ಕೇರಿ
ಜಿಲ್ಲಾಧಿಕಾರಿ,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– IV-A | ಬೆಂಗಳೂರು, ಶುಕ್ರವಾರ, ನವೆಂಬರ್ ೭, ೨೦೧೪ (ಕಾರ್ತೀಕ ೧೬, ಶಕ ವರ್ಷ ೧೯೩೬) | ನಂ. ೬೭೫ |
|---|---|---|
| **Part– IV-A** | **Bangalore, Friday, November 7, 2014 (Karthika 16, Shaka Varsha 1936)** | **No. 675** |


### ಶಿಕ್ಷಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಇಡಿ 300 ಡಿಸಿಇ 2013(ಭಾ–3), ಬೆಂಗಳೂರು, ದಿನಾಂಕ: 06–11–2014**

ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಭರ್ತಿ ಮಾಡಲು ಕರ್ನಾಟಕ ಶಿಕ್ಷಣ ಇಲಾಖಾ ಸೇವೆಗಳು (ಕಾಲೇಜು ಶಿಕ್ಷಣ ಇಲಾಖೆ) (ನೇಮಕಾತಿ) (ವಿಶೇಷ) ನಿಯಮಗಳು 2014 ರನ್ನು ದಿನಾಂಕ: 25–10–2014 ರಂದು ಹೊರಡಿಸಲಾಗಿದ್ದು, ಸದರಿ ನಿಯಮದ ನಿಯಮ 2(ಎಫ್)ರಲ್ಲಿ ಆಯ್ಕೆ ಪ್ರಕ್ರಿಯೆಯನ್ನು ನಡೆಸಲು ಆಯ್ಕೆ ಪ್ರಾಧಿಕಾರವು ಕರ್ನಾಟಕ ಲೋಕ ಸೇವಾ ಆಯೋಗ ಅಥವಾ ಇತರೆ ನಿಗದಿತ ಸಂಸ್ಥೆ ಎಂದು ತಿಳಿಸಲಾಗಿದೆ.

ಮುಂದುವರೆದು, ಕರ್ನಾಟಕ ಲೋಕ ಸೇವಾ ಆಯೋಗ (ಸಮಾಲೋಚನೆ) ವಿನಿಮಯಗಳು, 2000ರ ಅನುಬಂಧ–2ಕ್ಕೆ ದಿನಾಂಕ:08–04–2002ರ ಅಧಿಕೃತ ಜ್ಞಾಪನ ಸಂಖ್ಯೆ:ಡಿಪಿಎಆರ್ 03 ಎಸ್‌ಸಿಸಿ 2002ರಲ್ಲಿ ಮಾಡಲಾದ ತಿದ್ದುಪಡಿಯ ಹಿನ್ನೆಲೆಯಲ್ಲಿ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳ ನೇಮಕಾತಿಯನ್ನು ಹೊರತುಪಡಿಸಿ, ಶಿಸ್ತು ಪ್ರಕರಣಗಳಿಗೆ ಹಾಗೂ ಇನ್ನಿತರ ಸೇವಾ ವಿಷಯಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಲೋಕಸೇವಾ ಆಯೋಗದೊಡನೆ ಸಮಾಲೋಚನೆ ನಡೆಸುವುದು ಅವಶ್ಯಕವಿರುತ್ತದೆ.

ಆದುದರಿಂದ, ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಖಾಲಿ ಇರುವ 1298 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡುವ ಸಲುವಾಗಿ ಆಯ್ಕೆ ಪ್ರಕ್ರಿಯೆಯನ್ನು ನಡೆಸಲು ಕರ್ನಾಟಕ ಪರೀಕ್ಷಾ ಪ್ರಾಧಿಕಾರವನ್ನು ಆಯ್ಕೆ ಪ್ರಾಧಿಕಾರವನ್ನಾಗಿ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)


## ವಿಶೇಷ ರಾಜ್ಯ ಪತ್ರಿಕೆ

| ಭಾಗ– IV-A | ಬೆಂಗಳೂರು, ಶುಕ್ರವಾರ, ನವೆಂಬರ್ ೭, ೨೦೧೪ (ಕಾರ್ತೀಕ ೧೬, ಶಕ ವರ್ಷ ೧೯೩೬) | ನಂ. ೬೭೬ |
|---|---|---|
| **Part– IV-A** | **Bangalore, Friday, November 7, 2014 (Karthika 16, Shaka Varsha 1936)** | **No. 676** |


### ಅಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ಅಧಿಸೂಚನೆ**

**ಸಂ: ಆನಾಸ 70 ಸಲಫ 2012, ಬೆಂಗಳೂರು, ದಿನಾಂಕ: 07–11–2014**

ಗ್ರಾಹಕ ಸಂರಕ್ಷಣಾ ಅಧಿನಿಯಮ, 1986 (1986ರ ಕೇಂದ್ರ ಅಧಿನಿಯಮ 68)ರ 30ನೇ ಪ್ರಕರಣದ (2)ನೇ ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಕರ್ನಾಟಕ ಗ್ರಾಹಕ ಸಂರಕ್ಷಣಾ ನಿಯಮಗಳು, 1988ನ್ನು ಮತ್ತಷ್ಟು ತಿದ್ದುಪಡಿ ಮಾಡುವ ಉದ್ದೇಶದಿಂದ ಈ ಮುಂದಿನ ನಿಯಮಗಳ ಕರಡನ್ನು ಸದರಿ ಅಧಿನಿಯಮದ ಪ್ರಕರಣ 30ರ ಉಪ ಪ್ರಕರಣ (2) ಮತ್ತು ಪ್ರಕರಣ 2ರ ಉಪ ಪ್ರಕರಣ (1)(ಎಲ್)ನಲ್ಲಿ ಅಗತ್ಯಪಡಿಸಲಾದಂತೆ, ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ, ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅದು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಸದರಿ ಕರಡಿಗೆ ಸಂಬಂಧಿಸಿದಂತೆ, ಮೇಲೆ ನಿಗಧಿಪಡಿಸಿದ ಅವಧಿಯು ಮುಕ್ತಾಯಗೊಳ್ಳುವುದಕ್ಕೆ ಮೊದಲು ಯಾರೇ ವ್ಯಕ್ತಿಯಿಂದ ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಮತ್ತು ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ವಿಕಾಸಸೌಧ, ಬೆಂಗಳೂರು–560001 ಇವರಿಗೆ ಸಲ್ಲಿಸಬಹುದು.

**ಕರಡು ನಿಯಮಗಳು**

ಸರ್ಕಾರದ ಅಧಿಸೂಚನೆ ಸಂ.ಆನಾಸ 70 ಸಲಫ 2013, ದಿನಾಂಕ:11.08.2014ರಂದು ಹೊರಡಿಸಲಾಗಿರುವ ಅಧಿಸೂಚನೆಯಲ್ಲಿನ ನಿಯಮಗಳ ಭಾಗದಲ್ಲಿರುವ ಕ್ರಮ ಸಂ.7 & 8ರಲ್ಲಿ ಇರುವುದನ್ನು ಈ ಕೆಳಕಂಡಂತೆ ಸೇರಿಸಿ ಮಾರ್ಪಡಿಸಿದೆ.

| ಕ್ರ ಸಂ. | ಚಾಲ್ತಿಯಲ್ಲಿರುವ ನಿಯಮ | ಸೇರಿಸಿ ಮಾರ್ಪಡಿಸಿದ ನಿಯಮ | |
|---|---|---|---|
| 7. | ವಿಧಾನಸಭಾ ಸಭಾಧ್ಯಕ್ಷರಿಂದ ನಾಮ ನಿರ್ದೇಶಿತವಾಗುವ ಮೂರು ಜನ ಕರ್ನಾಟಕ ವಿಧಾನಸಭೆಯ ಸದಸ್ಯರು | ಕರ್ನಾಟಕ ವಿಧಾನಸಭೆಯ ಸಭಾಧ್ಯಕ್ಷರು ಸರ್ಕಾರದೊಂದಿಗೆ ಸಮಾಲೋಚಿಸಿದ ನಂತರ ನಾಮ ನಿರ್ದೇಶಿತವಾಗುವ ಮೂರು ಜನ ಕರ್ನಾಟಕ ವಿಧಾನಸಭೆಯ ಸದಸ್ಯರು | ಸದಸ್ಯರು |
| 8. | ವಿಧಾನ ಪರಿಷತ್ತು ಸಭಾಪತಿಯವರಿಂದ ನಾಮ ನಿರ್ದೇಶಿತವಾಗುವ ಇಬ್ಬರು ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರು | ಕರ್ನಾಟಕ ವಿಧಾನಪರಿಷತ್ತು ಸಭಾಪತಿಯವರು ಸರ್ಕಾರದೊಂದಿಗೆ ಸಮಾಲೋಚಿಸಿದ ನಂತರ ನಾಮ ನಿರ್ದೇಶಿತವಾಗುವ ಇಬ್ಬರು ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |

ಇನ್ನುಳಿದಂತೆ, ಅಧಿಸೂಚನೆಯಲ್ಲಿನ ಯಾವುದೇ ನಿಯಮಗಳು ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎನ್. ಸುಮತಿ**
ಪೀಠಾಧಿಕಾರಿ–3
ಅಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

## FOOD, CIVIL SUPPLIES & CONSUMER AFFAIRS SECRETARIAT

### NOTIFICATION

### No. FCS 70 SLF 2012, Bangalore, Dated: 07-11-2014

The draft of the following rules to further amend the Karnataka Consumer Protection Rules, 1988, which the Government of Karnataka proposes to make in exercise of the powers conferrd by sub-section (2) of section 30 of the Consumer Protection Act, 1986 (Central Act 68 of 1986), is hereby published as required by sub-section (2) of section 30 and sub-section (1)(l) of section 2 of the said Act, for the information of persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government, Objections or suggestions may be addressed to the Additional Chief Secretary to Government, Food, Civil Supplies & Consumer Affairs Department, Vikasa Soudha, Bangalore-01.

**DRAFT RULES**

In Government Notification No.FCS 70 SLF 2013, dated:11.08.2014, the rule in (g) & (h) is modified and substituted as follows:

| Sl. No. | Existing | Modified | |
|---|---|---|---|
| (g) | Three members of the Karnataka Legislative Assembly nominated by the Speaker | In Consultation with the Government Hon'ble Chairman of the Karnataka Legislative Assembly nominate three members of Karnataka Legislative Assembly | Member |
| (h) | Two members of the Karnataka Legislative Council nominated by the Chairman | In Consultation with the Government Hon'ble Speaker of the Karnataka Legislative Council nominate two members of Karnataka Legislative Council | Member |

All other rules in the said notification remain unaltered.

By Order and in the name of the Governor of Karnataka

**B.N.SUMATHI**
Desk Officer-3,
Food, Civil Supplies & Consumer
Affairs Department

# ವಿಶೇಷ ರಾಜ್ಯ ಪತ್ರಿಕೆ

| ಭಾಗ– IV-A | ಬೆಂಗಳೂರು, ಶುಕ್ರವಾರ, ನವೆಂಬರ್ ೭, ೨೦೧೪ (ಕಾರ್ತೀಕ ೧೬, ಶಕ ವರ್ಷ ೧೯೩೬) | ನಂ. ೬೭೭ |
|---|---|---|
| Part– IV-A | Bangalore, Friday, November 7, 2014 (Karthika 16, Shaka Varsha 1936) | No. 677 |

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂ: ಸಿಆಸುಇ 09 ಎಆರ್‌ಬಿ 2013, ಬೆಂಗಳೂರು, ದಿನಾಂಕ: 07–11–2014**

ಭಾರತ ಸಂವಿಧಾನದ 166 ನೇ ಅನುಚ್ಛೇದದ ಕಲಮು (2) ಮತ್ತು (3) ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸರ್ಕಾರ (ಕೆಲಸಗಳ ಹಂಚಿಕೆ) ನಿಯಮಗಳು, 1977, ಇದಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಕೆಳಕಂಡ ನಿಯಮಗಳನ್ನು ಈ ಮೂಲಕ ರಚಿಸಿದ್ದಾರೆ, ಎಂದರೆ,–

1. **ಶೀರ್ಷಿಕೆ ಮತ್ತು ಪ್ರಾರಂಭ** :– 1) ಈ ನಿಯಮಗಳನ್ನು ಕರ್ನಾಟಕ ಸರ್ಕಾರ (ಕೆಲಸಗಳ ಹಂಚಿಕೆ) (ತಿದ್ದುಪಡಿ) ನಿಯಮಗಳು, 2014 ಎಂದು ಕರೆಯತಕ್ಕದ್ದು.

   2) ಇವುಗಳು, ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರುತ್ತವೆ.

2. **ಅನುಸೂಚಿ XIII–ಎ ಗೆ ತಿದ್ದುಪಡಿ:–** ಕರ್ನಾಟಕ ಸರ್ಕಾರದ (ಕೆಲಸಗಳ ಹಂಚಿಕೆ) ನಿಯಮಗಳು, 1977 ರಲ್ಲಿ (ಇನ್ನು ಮುಂದೆ ಸದರಿ ನಿಯಮಗಳೆಂದು ಕರೆಯಲಾಗುವ) ಅನುಸೂಚಿ XIII–ಎ ಯಲ್ಲಿ,–

   (i) "ಎ.ನೀರಾವರಿ" ಶೀರ್ಷಿಕೆಯಡಿಯಲ್ಲಿ ಕ್ರಮ ಸಂಖ್ಯೆ. "4. ಸಣ್ಣ ನೀರಾವರಿ ವಲಯಗಳು"ನ್ನು ಕೈಬಿಡತಕ್ಕದ್ದು;

   (ii) "ಎಎ.ಅಂತರ್ಜಲ" ಶೀರ್ಷಿಕೆ ಮತ್ತು ಅದರಡಿಯಲ್ಲಿ ಸಂಬಂಧಿಸಿದ ನಮೂದುಗಳನ್ನು ಕೈಬಿಡತಕ್ಕದ್ದು ; ಮತ್ತು

   (iii) "ಬಿಬಿ. ಪ್ರವಾಹ ನಿಯಂತ್ರಣ ಮತ್ತು ನಿರ್ವಹಣೆ" ಶೀರ್ಷಿಕೆಯಡಿಯಲ್ಲಿ "ಕಡಲ ಗೋಡೆಗಳ ನಿರ್ಮಾಣಕ್ಕೆ" ಎಂಬ ಪದಗಳ ನಂತರ "ಮತ್ತು ಸಣ್ಣ ನೀರಾವರಿಗೆ ಸಂಬಂಧಿಸಿದ ಪ್ರವಾಹ ನಿಯಂತ್ರಣ ಮತ್ತು ಸಂರಕ್ಷಣಾ ಕಾಮಗಾರಿಗಳಿಗೆ" ಎಂಬ ಪದಗಳನ್ನು ಸೇರ್ಪಡೆ ಮಾಡತಕ್ಕದ್ದು.

2. **ಅನುಸೂಚಿ XIII–ಬಿ ರ ಸೇರ್ಪಡೆ** :– ಸದರಿ ನಿಯಮಗಳ ಅನುಸೂಚಿ **XIII**–ಎ ನಂತರ, ಈ ಕೆಳಕಂಡದ್ದನ್ನು ಸೇರ್ಪಡೆ ಮಾಡತಕ್ಕದ್ದು, ಎಂದರೆ,–

### ಅನುಸೂಚಿ XIII–ಬಿ

### ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ

### ಎ.ಸಣ್ಣ ನೀರಾವರಿ

1. 40 ರಿಂದ 2000 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶ ಹೊಂದಿರುವ ಕೆರೆಗಳ ಅಭಿವೃದ್ಧಿ ಮತ್ತು ನಿರ್ವಹಣೆ.
2. ಹೊಸಕೆರೆ, ಇಂಗು ಕೆರೆಗಳ ನಿರ್ಮಾಣ.
3. ಬಾಂದಾರ, ಸೇತುವೆ ಸಹಿತ ಬಾಂದಾರ ಮತ್ತು ಕಿಂಡಿ ಅಣೆಕಟ್ಟುಗಳು.
4. ಮೇಲ್ಮೈ ಏತ ನೀರಾವರಿ ಯೋಜನೆಗಳು.
5. ಸಣ್ಣ ನೀರಾವರಿಗೆ ಸಂಬಂಧಿಸಿದ ಪ್ರವಾಹ ನಿಯಂತ್ರಣ ಮತ್ತು ಸಂರಕ್ಷಣಾ ಕಾಮಗಾರಿಗಳು.
6. ಸಣ್ಣ ನೀರಾವರಿ ವಲಯಗಳು

### ಬಿ. ಅಂತರ್ಜಲ ವಿಭಾಗ

ಅಂತರ್ಜಲಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳು

### ಸಿ. ಜಲಸಂವರ್ಧನಾ ಯೋಜನಾ ಸಂಘ

ಜಲಸಂವರ್ಧನಾ ಯೋಜನಾ ಸಂಘಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳು

### ಡಿ. ಸಂಹಿತೆಗಳು ಮತ್ತು ಕೈಪಿಡಿಗಳು

ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆಯ ಆಡಳಿತ ನಿಯಂತ್ರಣದ ಅಡಿಯಲ್ಲಿ ಬರುವ ಇಲಾಖೆಗಳಿಗೆ ಸಂಬಂಧಿಸಿದ ಸಂಹಿತೆಗಳನ್ನು ಮತ್ತು ಕೈಪಿಡಿಗಳನ್ನು ಸಿದ್ಧಪಡಿಸುವುದು.

### ಇ. ನೌಕರಿಭರ್ತಿ ನಿಯಮಗಳು ಮತ್ತು ನೇಮಕಗಳು

1. ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆಯ ಆಡಳಿತ ನಿಯಂತ್ರಣದ ಅಡಿಯಲ್ಲಿ ಬರುವ ಸೇವೆಗಳಿಗೆ ಮತ್ತು ಹುದ್ದೆಗಳಿಗೆ ಸಂಬಂಧಿಸಿದ ನೌಕರಿಭರ್ತಿ ನಿಯಮಗಳು.

2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಡಿಯಲ್ಲಿ ಬರುವವರನ್ನು ಹೊರತುಪಡಿಸಿ ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆಯ ಆಡಳಿತ ನಿಯಂತ್ರಣದ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ಮತ್ತು ಸಿಬ್ಬಂದಿಯ ನೇಮಕಗಳು, ಸ್ಥಳ ನಿಯುಕ್ತಿಗಳು, ವರ್ಗಾವಣೆಗಳು, ರಜೆ ಇತ್ಯಾದಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ.ಮಂಗಳ ಜಿ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 09 ARB 2013, Bangalore, Dated: 07-11-2014

In exercise of the powers conferred by clauses (2) and (3) of Article 166 of Constitution of India, the Governor of Karnataka hereby makes the following rules further to amend the Karnataka Government (Allocation of Business) Rules,1977, namely :-

1. **Title and Commencement :-** 1) These rules may be called the Karnataka Government (Allocation of Business) (Amendment) Rules, 2014.

2) They shall come into force from the date of their publication in the Official Gazette.

2. **Amendment of Schedule XIII-A :-** In the Karnataka Government (Allocation of Business) Rules, 1977 (hereinafter referred as the said rules) in Schedule XIII-A,-

(i) under the heading "A. Irrigation" item no. "4. Minor Irrigation Zones" shall be omitted;

(ii) the heading "AA. Ground Water" and entries relating thereunder shall be omitted; and

(iii) under the heading "BB. Flood control and Management" after the words "Construction of Sea Walls" the words "and Flood control and protection works pertaining to minor irrigation" shall be inserted.

2. **Insertion of Schedule XIII-B: -** After Schedule XIII-A, of the said rules the following shall be inserted, namely,-

**SCHEDULE XIII-B**

**MINOR IRRIGATION AND GROUND WATER DEVELOPMENT DEPARTMENT**

**A. Minor Irrigation**

1. Development and maintenance of tanks having 40 to 2000 hectares of catchment area.
2. Construction of new tanks and percolation tanks.
3. Construction of barrages, barrages with bridge and vented dams.
4. Surface lift irrigation schemes.
5. Flood control and protection works pertaining to minor irrigation
6. Minor Irrigation Zones

**B. Ground water Division**

All matters pertaining to Ground water

**C. Jalasamvardhana Yojana Sangha**

All matters pertaining to Jalasamvardhana Yojana Sangha

**D. Codes and Manuals**

Preparation of Codes and Manuals in respect of departments under its administrative control.

**E. Recruitment Rules and Appointments**

1. Recruitment rules relating to the services and posts under the administrative control of Minor Irrigation and Ground water Development Department.

2. Appointments, postings, transfers, leave, etc., of the officers and staff working under the administrative control of Minor Irrigation and Ground water Development Department except those coming under the Department of Personnel and Administrative Reforms.

By Order and in the name of the Governor of Karnataka
**Dr. Mangala G.S**
Under Secretary to Government
Department of Personnel and
Administrative Reforms (Service Rules – 1)

# ವಿಶೇಷ ರಾಜ್ಯ ಪತ್ರಿಕೆ

| ಭಾಗ– IV-A | ಬೆಂಗಳೂರು, ಶುಕ್ರವಾರ, ನವೆಂಬರ್ ೭, ೨೦೧೪ (ಕಾರ್ತೀಕ ೧೬, ಶಕ ವರ್ಷ ೧೯೩೬) | ನಂ. ೬೭೮ |
|---|---|---|
| **Part– IV-A** | **Bangalore, Friday, November 7, 2014 (Karthika 16, Shaka Varsha 1936)** | **No. 678** |

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂ: ಸಿಆಸುಇ 10 ಎಆರ್‌ಬಿ 2014, ಬೆಂಗಳೂರು, ದಿನಾಂಕ: 07–11–2014**

ಭಾರತ ಸಂವಿಧಾನದ 166 ನೇ ಅನುಚ್ಛೇದದ (2) ಮತ್ತು (3)ನೇ ಖಂಡಗಳಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಮೂಲಕ ಕರ್ನಾಟಕ ಸರ್ಕಾರ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು, 1977 ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ರಚಿಸಿದ್ದಾರೆ, ಎಂದರೆ :–

**1. ಹೆಸರು ಮತ್ತು ಪ್ರಾರಂಭ** :– (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರ (ಕಾರ್ಯಕಲಾಪಗಳ ನಿರ್ವಹಣೆ) (ತಿದ್ದುಪಡಿ) ನಿಯಮಗಳು, 2014 ಎಂದು ಕರೆಯತಕ್ಕದ್ದು.

(2) ಇವು, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಮೊದಲನೇ ಅನುಸೂಚಿಯ ತಿದ್ದುಪಡಿ** :– ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು, 1977ರ ಮೊದಲನೇ ಅನುಸೂಚಿಯ 15ನೇ ಬಾಬಿನ ಮೊದಲ ಪರಂತುಕದ ನಂತರ ಈ ಮುಂದಿನ ಪರಂತುಕವನ್ನು ಸೇರ್ಪಡೆ ಮಾಡತಕ್ಕದ್ದು, ಎಂದರೆ,–

**"ಮತ್ತು ಪರಂತು ಕಾಮಗಾರಿಯ ಮೂಲ ಅಂದಾಜು ರೂ.5.00ಕೋಟಿ ಅಂದಾಜಿಗಿಂತ ಕಡಿಮೆ ಇದ್ದು, ನಂತರ ಪರಿಷ್ಕೃತ ಅಂದಾಜು ರೂ.5.00ಕೋಟಿ ಮೀರಿದ್ದಲ್ಲಿ ಅಂತಹ ಪ್ರಕರಣವನ್ನು ಸಚಿವ ಸಂಪುಟದ ಮುಂದೆ ಮಂಡಿಸತಕ್ಕದ್ದು.'**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ.ಮಂಗಳ ಜಿ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 10 ARB 2014, Bangalore, Dated: 07-11-2014**

In exercise of the powers conferred by clauses (2) and (3) of the Article 166 of the Constitution of India, the Governor of Karnataka hereby makes the following rules further to amend the Karnataka Government (Transaction of Business) Rules, 1977, namely :

**1. Title and commencement :-** (1) These Rules may be called the Karnataka Government (Transaction of Business ) (Amendment) Rules, 2014.

(2) They shall come into force on the date of their publication in the official Gazette.

2. **Amendment of First Schedule :-** In the Karnataka Government (Transaction of Business) Rules, 1977, in the First Schedule in item 15, after the first proviso, the following proviso shall be inserted, namely,-

**"Provided further that if the original estimate of work is less than rupees five crores, but later if the revised estimate exceeds rupees five crores, then such case shall be brought before the Cabinet"**

By Order and in the name of the Governor of Karnataka

**Dr. Mangala G.S**
Under Secretary to Government
Department of Personnel and
Administrative Reforms
( Service Rules – 1)

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| **ಭಾಗ– IV-A** | **ಬೆಂಗಳೂರು, ಸೋಮವಾರ, ನವೆಂಬರ್ ೧೦, ೨೦೧೪ (ಕಾರ್ತೀಕ ೧೯, ಶಕ ವರ್ಷ ೧೯೩೬)** | **ನಂ. ೬೭೯** |
| **Part– IV-A** | **Bangalore, Monday, November 10, 2014 (Karthika 19, Shaka Varsha 1936)** | **No. 679** |

## URBAN DEVELOPMENT SECRETARIAT

### NOTIFICATION

### No. UDD 507 MNY 2012, Bangalore, Dated: 10-11-2014

The draft of the Karnataka Municipal Corporations (Ward Committee) Rules, 2013 which the Government of Karnataka proposes to make in exercise of the powers conferred by section 13K read with section 221 and 227 of the Karnataka Municipal Corporations Act, 1976 (Karnataka Act 14 of 1977) and in supersession of Notification No.UDD 507 MNY 2012, dated: 27-08-2013 is hereby published as required by subsection (1) of section 221 of the said Act for the information of the all persons likely to be effected thereby and notice is hereby given that the said draft will taken into consideration after fifteen days from the date of its publication in the official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Urban Development Department, Vikasa Soudha, Bangalore - 560 001.

**DRAFT RULES**

**1. Title and commencement**.- (1) These rules may be called the Karnataka Municipal Corporations (Ward Committee) Rules, 2014.

(2) They shall come into force from the date of their publication in the official Gazette.

1. **Definitions.-** In these rules, unless the context otherwise requires,-

(a) Act" means the Karnataka Municipal Corporations Act, 1976 (Karnataka Act 14 of 1977);

(b) "Chairperson" means Chairperson of the ward committee.

(c) "Clear day" means days excluding Sundays and public holidays;

(d) "Member" means a member of the Ward Committee;

(e)"Secretary" means an officer designated by the Commissioner under sub-section (4) of section 13H of the Act.

(f) "Section" means section of the Act;

(g) "Urgency" means urgency due to natural calamities, outbreak of disease or fire.

**3. Functions of the Ward Committee.-** The Ward Committee shall discharge the functions as specified in section 13-I of the Act.

**4. Functions of the Secretary.-**(1) The Secretary shall,-

(a) be responsible for preparing the agenda of the meeting in consultation with chairperson and also sign the agenda to be transacted in the meeting;

(b) issue notice to the members and officers for the upcoming meeting including special invitees, if any;

(c) have custody of all papers and documents connected with the proceedings of the meeting of the Ward Committee;

(d) attend every meeting of the Ward Committee and take part in the proceedings but shall not be entitled to vote;

(e) furnish his opinion or any clarification in respect of any resolution or any question that arises in the meeting;

(f) Forward all resolutions of the Ward Committee to the Concerned Authorities for necessary action.

(g) be responsible for the protection of the property, that belongs to the Corporation.

(h) Provide the necessary information to the ward committee, if the ward committee desires, on all Government schemes which fall in the ambit of the function of the Ward Committee.

(i) endeavour to furnish the information related to the ward committee in the public domain.

(2) The Commissioner shall make available to the Ward Committee through the Secretary the following information, namely:-

(i) Decisions of the Standing Committee;

(ii) decisions/resolutions of the Council;

(iii) ward-wise budgetary allocation made, if any, by the Corporation or any of the Standing Committee;

(iv) copy of the Ward maps,

(v) details of the Corporation properties ward-wise,

(vi) information on revenue streams, and

(vii) information which is needed for the proper functioning of the ward committee as per section 13-I.

**5. Calling of the ward committee meeting and Preparation of Agenda for the meeting.-** (1) The Chairperson of the Ward Committee shall endeavour to fix a particular day in a month for the meeting and shall be made known to the public. However, the meeting of the ward committee shall not be held on the day of the council meeting or on the day of meeting of any standing committee of the Corporation.

(2) The meeting shall not be held unless a clear Seven Clear days notice along with the agenda for the meeting is circulated in advance to all the members. However, in case of urgency the meetings shall be convened within 48 hours by serving proper notice or communication to all the members.

(3) Every notice of the meeting shall be issued by the Secretary of the Committee. The notice shall be exhibited in all prominent public offices with the ward such as Water Supply Office, Electric Supply Office, Public Health Centres, etc.

(4) Steps are to be taken to ensure that a Link is created on the Corporation website for each ward and all meeting notices and agenda for the meetings are published on it, in a timely manner.

(5) In cases of Urgency the reasons may be explicitly mentioned in the Urgent meeting notices.

(6) Members may give suggestions to the secretary on the meeting agenda one week prior to the issuing of meeting notice. The Secretary shall bring the suggestions to the notice of the chairperson.

**6. Procedure for transaction of business of the Ward Committee.-** (1) The Chairperson in consultation with the Commissioner keeping in view of the public participation choose a suitable place of the meeting. The place of the meeting as far as possible shall be in the ward office premises or place adjacent to the ward office of the concerned ward. If the ward office premises are insufficient for this purpose, alternative venues such as Government schools or public spaces proximal to the ward office, may be utilized.

(2) Any citizen may approach the chairperson or any of the member for adderessing any issues related to public and ward development. If there no improvement, then it is open for such citizen to file a complaint before the commissioner giving all particulars and also explaining the in action on the part of the chairperson and the members.

(3) Quorum for conducting the Ward meeting shall be 1/3 of the total members of the Committee.

(4) No member shall take part in the discussion of any question coming up for consideration at the meeting if, the question is one in which he has any direct or indirect pecuniary interest by himself or his Partner.

(5) All the meetings of the Ward Committee shall be open to the public.

(6) Minutes of the meeting may be recorded. Videography of the meeting may be allowed for the public.

(7) Links shall be created on the Corporation website for each ward and all notices and minutes of the meetings shall be published in a timely manner.

**7. Account and Audit of the Ward Committee.-** (1) The accounts of all receipts and expenditure of the Ward Committee for the purpose of conduct meetings and discharge of their function shall be given by the Financial Rules made under Section 151 of the Act.

(2) Annual Reports shall be prepared by the Secretaries of the respective wards for every financial year and submit the same to the Commissioner before the month of August of the succeeding Financial year.

**8. Repeal and savings:-** The Karnataka Municipal Corporations (Ward Committee) Rules, 1997 shall be repealed with immediate effect.

By Order and in the name of the Governor of Karnataka,

**N. GOPALAIAH**

Under Secretary to Government

Urban Development Department (BBMP)

